# 121

# ವೀರಾಗ್ರಣಿ—ಕರ್ಣ

(ಏಕಾಂಕ ನಾಟಕ)

ಬರೆದವರು:

ಅಮ್ಮೆಂಬಳ ಅನಂತಯ್ಯ ನಾವಡ, ವಿದ್ವಾನ್

ಮಂಗಳೂರು.

1957.




ಒಂದಾಣೆ ಮಾಲೆ

# ಒಂದಾಣೆ ಮಾಲೆಯ ಈ ವರೆಗಿನ ಪ್ರಕಟಣೆಗಳು:

೧* ಕೆಪ್ಪಟರಾಯ; ೨ ನಾಣೀಶ್ವರರು(ದ್ವಿ. ಮುದ್ರಣ); ೩ ಕಳ್ಳನಿಗೆ ಸಂಭಾವನೆ (ದ್ವಿ. ಮುದ್ರಣ) ೪ *ಸದ್ರಿಸುಬ್ಬ: ೫ ಅದ್ಭುತ ತ್ಯಾಗ (ದ್ವಿ. ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾವಣೆ; ೭* ಬೀಡಿ ಸೇದಬೇಡಿ ಮತ್ತು ಆ ಮಗು; ೮* ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ. ಮುದ್ರಣ); ೧೦ *ಆಶೂ ಔಷಧಿಗಳ ಕೈಪಿಡಿ; ೧೧ ಶ್ರೀಕ್ಷೇತ್ರ ಧರ್ಮಸ್ಥಳ (ಚ. ಮುದ್ರಣ); ೧೨ ಜೀವದ ಮೌಲ್ಯ (ದ್ವಿ. ಮುದ್ರಣ); ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ. ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ. ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ ಜಗಳಗಂಟಿ( ದ್ವಿ, ಮುದ್ರಣ); ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I(ದ್ವಿ. ಮುದ್ರಣ); ೨೨ ತಿರುಕ್ಕುರಲ್ (ದ್ವಿ. ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ–II (ದ್ವಿ. ಮು); ೨೫ ಧೈರ್ಯ ಮತ್ತು ಇತರ ಸತ್ಯಕಥೆಗಳು; ೨೬ ಮಾರಾವತಾರ(ದ್ವಿ. ಮು); ೨೭ ಹಾಸವಿಲಾಸ(ದ್ವಿ. ಮು.); ೨೮ ಸತ್ಯವಂತ ಬಾಬಿ [ದ್ವಿ. ಮು.]; ೨೯ ಜಾಣ್ಮೆಯ ಒಗಟು (ದ್ವಿ. ಮು); ೩೦ ಜಾತಕ ಕಥೆಗಳು(ದ್ವಿ. ಮು.); ೩೧ ಕಾರ್ಕಳದ ಚರಿತ್ರೆ; ೩೨ ಮಂಜರ್; ೩೩ ದರ್ಶನದ ಕಥೆಗಳು; ೩೪ ಅಳುವಿನಹೊಳೆ ಮತ್ತು ಕೇಶವಭೂಪ; ೩೫ ಶರಾಬಿನ ಪೀಪಾಯಿಗಳು; ೩೬ ಉಪದೇಶ ಶತಕ; ೩೭* ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ. ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು(ದ್ವಿ. ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ (ದ್ವಿ. ಮು.) ೪೬ ೧೮೫೭ರ ಸಿಪಾಯಿ ದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾ ಜ್ಞಾನಕೋಶ; ೫೦ ಪಂಡಿತನ ಪಿಟೀಲು; ೫೧ ಭೋಗಯಾತ್ರೆ; ೫೨ ಸಂಗ್ರಾಮ ಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ: ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟ ಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯವರ್; ೬೪ ಲೌಕಿಕ ನ್ಯಾಯಗಳು; ೬೫* ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ ಮುದ್ರಣ); ೬೮ ಕರುಣೆ ಮತ್ತು ಇತರ ಕಥೆಗಳು; ೬೯* ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ...; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಫಲನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧ ಆದಿಶ್ರೀ ಶಂಕರಾಚಾರ್ಯರ ಜೀವನಚರಿತ್ರೆ (ದ್ವಿ. ಮು.) ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ದ್ವಿ. ಮು.) ೮೩ ಬೆಡಗಿನ ನಾಡು ಕೊಡಗು; ೮೪ ಆಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ

[ಪುಟ 16ಕ್ಕೆ ಮುಂದುವರಿದಿದೆ.]

# ವೀರಾಗ್ರಣಿ—ಕರ್ಣ!

## ಪಾತ್ರವರ್ಗ:—

೧. ಕರ್ಣ. ೨. ಕೃಷ್ಣ. ೩. ಅರ್ಜುನ. ೪. ಶಲ್ಯ. ೫. ಸೂತ. ೬. ಸನ್ಯಾಸಿ. ೭. ಬ್ರಾಹ್ಮಣ ೮. ಪರಶುರಾಮ ೯. ಕುಂತಿ. ೧೦ ರಾಧೆ.

### ದೃಶ್ಯ ೧

(ಸಾಯಂಕಾಲ. ಗಂಗಾನದಿಯಲ್ಲಿ ವೃದ್ಧ ಸೂತನೊಬ್ಬನು ಬಲೆಬೀಸು ತ್ತಿರುವನು. ಮೀನುಗಳು ಸಿಗದಿರಲು ತನ್ನಲ್ಲಿಯೇ ತನ್ನ ದುಃಖವನ್ನು ತೋಡಿ ಕೊಳ್ಳುತ್ತಿರುವನು.)

ಸೂತ: ಅಯ್ಯೋ! ದೇವರೆ! ಸಾಯಂಕಾಲವಾಗುತ್ತಾ ಬಂತು. ಒಂದು ಮರಿಮೀನಾದರೂ ಸಿಗಲಿಲ್ಲ. ಮನೆಯಲ್ಲಿ ರಾಧೆಯು ನನ್ನ ಆಗಮನವನ್ನೇ ನಿರೀಕ್ಷಿಸುತ್ತಾ ಇರಬಹುದು. ಪಾಪ! ಬಡತನದ ಕಷ್ಟದೊಂದಿಗೆ— 'ಮಕ್ಕಳಿಲ್ಲವಲ್ಲಾ!' ಎಂಬ ದುಃಖವೂ ಸೇರಿ, ಬಹಳ ಸೊರಗಿಹೋಗಿದ್ದಾಳೆ. ಮುದಿತನದಿಂದಾಗಿ ದಿನದಿನಕ್ಕೂ ನನ್ನ ಅಂಗಾಂಗಗಳ ಶಕ್ತಿಸಾಮರ್ಥ್ಯವು ಕಡಿಮೆಯಾಗುತ್ತಾ ಬರುತ್ತಿದೆ. ಇಳಿವಯಸ್ಸಿನಲ್ಲಿ ಸತ್ಪುತ್ರನಿಂದ ಯೋಗ್ಯ ಸೇವೆಯನ್ನು ಕೈಕೊಳ್ಳದ ಮನುಷ್ಯನ ಜೀವನವು ವ್ಯರ್ಥ. ಈ ವರೆಗೂ ಇಲ್ಲದ ಆ ಭಾಗ್ಯ ಇನ್ನು ದೊರೆಯುವುದು ಅಸಂಭವ. ನಾನೊಬ್ಬ ನಿರ್ಭಾಗ್ಯಶಾಲಿ! (ಕಣ್ಣೀರೊರಸುವನು. ಪುನಃ ಒಮ್ಮೆ ಬಲೆಬೀಸಲು, ಏನೋ ಅದಕ್ಕೆ ಸಿಕ್ಕಿದಂತಾಗಿ ಸಂತೋಷದಿಂದ ಅದನ್ನು ಎತ್ತುವನು. ಅದೊಂದು ಪೆಟ್ಟಿಗೆ. ಅದರ ಬಾಯಿತೆರೆದು ನೋಡಲು, ಅದರೊಳಗಿರುವ ಹಸುಗೂಸನ್ನು ಕಂಡು ಬಹು ಸಂತೋಷದಿಂದಲೂ ಆಶ್ಚರ್ಯದಿಂದಲೂ ಅದನ್ನು ಎತ್ತಿಕೊಳ್ಳುವನು.) ಓ! ಗಂಗಾದೇವಿ! ಇಂದು ಮೀನು ದೊರೆಯು ದಿದ್ದರೂ ಚಿಂತೆಯಿಲ್ಲ. ಈ ಕಂದನನ್ನು ದಯಪಾಲಿಸಿದುದಕ್ಕಾಗಿ ನಿನಗೆ ಅನಂತ ವಂದನೆಗಳು. ಓ! ಸೂರ್ಯದೇವ! ಇದನ್ನು ನಿನ್ನ ಅನುಗ್ರಹ ವೆಂದೇ ಭಾವಿಸುತ್ತೇನೆ. ಈ ಮಗುವು ನಿನ್ನಂತೆಯೇ ತೇಜಸ್ವಿಯಾಗಿರು

ವುದು. ಇದೋ! ನಿನಗೆ ಸಾಷ್ಟಾಂಗ ನಮಸ್ಕಾರ. ಪುತ್ರಶೋಕದಿಂದ ನನಗಿಂತಲೂ ಹೆಚ್ಚಾಗಿ ಕೊರಗುತ್ತಿರುವ ನನ್ನಾಕೆ ರಾಧೆಗೆ ಈ ಮಗುವನ್ನೀಗಲೇ ತೋರಿಸಿ ಅವಳನ್ನು ಸಂತೋಷಪಡಿಸುವೆನು. (ಎಂದು ಮಗುವನ್ನೆತ್ತಿಕೊಂಡು ಒಳಗೆ ಹೋಗಿ, ಪುನಃ ರಾಧೆಯೊಡನೆ ಪ್ರವೇಶಿಸುವನು.)

ಸೂತ: ರಾಧೆ! ಇದೋ! ನಮ್ಮ ಕುಲವನ್ನು ಬೆಳಗಿಸತಕ್ಕ ಪ್ರದೀಪ! (ಎನ್ನುತ್ತಾ ರಾಧೆಗೆ ಕೊಡುವನು. ಅವಳು ಅದನ್ನೆತ್ತಿಕೊಂಡು ಸಂತೋಷಪಡುವಳು.)

ರಾಧೆ: ಇದೆಲ್ಲಿಂದ? ಯಾರ ಮಗು? ಎಷ್ಟು ಮುದ್ದಾಗಿದೆ! (ಎಂದು ಮುದ್ದಾಡುವಳು.)

ಸೂತ: ರಾಧೆ! ನಾವು ನಿಜವಾಗಿಯೂ ಪುಣ್ಯಶಾಲಿಗಳು! ಈ ಹೊತ್ತು ಮೀನು ಸಿಗಲಿಲ್ಲ. ಇದೋ! ಅದರ ಬದಲಾಗಿ ಈ ಮಗು ದೊರಕಿತು.

ರಾಧೆ: ನಿಮ್ಮ ಮಾತೇ ನನಗೆ ಅರ್ಥವಾಗುವುದಿಲ್ಲ,

ಸೂತ: ರಾಧೆ! ನಮ್ಮ ಭಾಗ್ಯವನ್ನು ಏನೆಂದು ಹೇಳಲಿ! ಗಂಗಾನದಿಯಲ್ಲಿ ಅಕಸ್ಮಾತ್ತಾಗಿ ತೇಲಿಬರುತ್ತಿದ್ದ ಒಂದು ಪೆಟ್ಟಿಗೆಯಲ್ಲಿ ಈ ಮಗುವಿನ ದರ್ಶನವಾಯಿತು. ಇದು ನನ್ನನ್ನೇ ಹುಡುಕಿಕೊಂಡು ಬಂದಿತೋ ಏನೋ ಎನ್ನುವಂತೆ, ನಾನು ಬೀಸಿದ ಬಲೆಯೊಳಗೆ ಸಿಲುಕಿತು. ಇನ್ನು ಈ ಕಂದನನ್ನು ಸಾಕಿ ಸಲಹುವ ಭಾರ ನಿನ್ನದು. ನಮ್ಮ ಮೊರೆಯನ್ನು ಕೇಳಿ ಸಾಕ್ಷಾತ್ ಸೂರ್ಯನಾರಾಯಣನೇ ಈ ವರಪ್ರಸಾದವನ್ನು ನಮಗೆ ದಯಪಾಲಿಸಿರಬೇಕು!

ರಾಧೆ: ನಿಜ. ಈ ಮಗುವು ಸಾಮಾನ್ಯ ಬಾಲಕನಂತೆ ಕಾಣುವುದಿಲ್ಲ. ಈ ಕರ್ಣಕುಂಡಲ, ಈ ವಜ್ರಕವಚ, ಈ ಕೋಮಲ ಅಂಗಾಂಗಗಳ ಸೌಂದರ್ಯ—ಇವುಗಳನ್ನು ನೋಡಿದರೆ—ಇದು ನಮಗೆ ಪರಮಾತ್ಮನ ಅನುಗ್ರಹವೆಂದೇ ಹೇಳಬೇಕು. ಕತ್ತಲೆಯಿಂದ ಕೂಡಿದ್ದ ನಮ್ಮ ಮನೆಯು ಈಗ ಬೆಳಕನ್ನು ಕಂಡಿತು.

ಸೂತ: (ಸ್ವಲ್ಪಹೊತ್ತು ಮಗುವನ್ನು ದಿಟ್ಟಿಸಿ) ವಿಶೇಷವಾಗಿ ಪ್ರಕಾಶಮಾನವಾದ ಕರ್ಣಕುಂಡಲಗಳಿಂದ ಶೋಭಿತನಾದ್ದರಿಂದ ಈ ಮಗುವಿಗೆ "ಕರ್ಣ" ಎಂದೇ ಹೆಸರಿಡೋಣ. ಆಗದೇ?

ರಾಧೆ: ಸರಿ, ಅದೇ ಒಳ್ಳೆಯದು.

(ಪರದೆ ಬೀಳುವುದು.)

(ನೇಪಥ್ಯದ ಮಾತು:—ಕರ್ಣನು ಸೂತನ ಮನೆಯಲ್ಲಿ ದೊಡ್ಡವನಾಗಿ ಬೆಳೆಯುತ್ತಾ ಬಂದನು. ಪ್ರಾಯಭರಿತನಾದ ಮೇಲೆ ಧನುರ್ವಿದ್ಯೆಯನ್ನು ಅಭ್ಯಾಸಿಸಲು ಗುರುವು ದೊರಕದೆ, ಕೊನೆಗೆ ತಾನು ಬ್ರಾಹ್ಮಣನೆಂದು ಹೇಳಿಕೊಂಡು ಪರಶುರಾಮನಿಂದ ಸಕಲ ಶಸ್ತ್ರವಿದ್ಯೆಗಳನ್ನು ಕಲಿತುಕೊಂಡನು.)

## ದೃಶ್ಯ ೨

(ಮಧ್ಯಾಹ್ನ. ಆಶ್ರಮದ ಕಾಡಿನಲ್ಲಿ ಪರಶುರಾಮನೂ ಬಾಣಬತ್ತಳಿಕೆ ಧನುಸ್ಸುಗಳಿಂದ ಕೂಡಿ ಕರ್ಣನೂ ಪ್ರವೇಶಿಸುವರು.)

ಪರಶುರಾಮ: ಕರ್ಣ! ನಿನ್ನ ವಿದ್ಯಾಭ್ಯಾಸವು ಮುಗಿಯಿತು. ಇನ್ನು ನೀನು ಊರಿಗೆ ಹೋಗಬಹುದು. ಸಕಲ ಶಸ್ತ್ರವಿದ್ಯೆಗಳನ್ನೂ ಬ್ರಹ್ಮಾಸ್ತ್ರದ ಪ್ರಯೋಗವನ್ನೂ ಕೂಡ ನಿನಗೆ ಉಪದೇಶಿಸಿರುವೆನು. ಈಗ ನಿನ್ನನ್ನು ಎದುರಿಸಬಲ್ಲ ವೀರನು ಈ ಲೋಕದಲ್ಲಿ ಯಾರೂ ಇಲ್ಲ. ನಿನ್ನ ಅಸ್ತ್ರವಿದ್ಯೆಯನ್ನು ಅನ್ಯಾಯ ನಿರ್ಮೂಲನ-ನ್ಯಾಯಪರಿಪಾಲನೆಗಳಿಗಾಗಿ ಉಪಯೋಗಿಸಿ ಕೀರ್ತಿವಂತನಾಗಿ ಬಾಳು.

ಕರ್ಣ: ನಿಮ್ಮ ಅನುಗ್ರಹಕ್ಕೆ ಪಾತ್ರನಾದ ನಾನು ಬಹಳ ಭಾಗ್ಯಶಾಲಿಯೇ ಸರಿ. ನೀವು ಕಲಿಸಿಕೊಟ್ಟಿರುವ ವಿದ್ಯೆಯನ್ನು ಸದ್ವಿನಿಯೋಗ ಮಾಡುವೆನು.

ಪರಶುರಾಮ: (ಸ್ವಲ್ಪ ಮುಂದೆ ಹೋಗಿ) ಕರ್ಣ! ಈ ಮಧ್ಯಾಹ್ನದ ಬಿಸಿಲಿನಲ್ಲಿ ನಡೆದು ಸ್ವಲ್ಪ ಆಯಾಸವಾಗಿದೆ. ಕ್ಷಣಹೊತ್ತು ಈ ಮರದ ನೆರಳಿನಲ್ಲಿ ವಿಶ್ರಮಿಸಿ ಆಶ್ರಮಕ್ಕೆ ಹಿಂತಿರುಗುವ.

ಕರ್ಣ: ಆಗಬಹುದು ಗುರುಗಳೆ! ಈ ಶೀತಲ ಛಾಯೆಯಲ್ಲಿ ನನ್ನ ತೊಡೆಯ ಮೇಲೆ ತಲೆಯಿಟ್ಟುಕೊಂಡು ಮಲಗಿ ವಿಶ್ರಾಂತಿಪಡೆಯಬೇಕೆಂದು ವಿನಂತಿಮಾಡಿಕೊಳ್ಳುತ್ತೇನೆ.

ಪರಶು: ನಾಳೆ ನೀನು ಊರಿಗೆ ಹೋಗುವವನು. ಆಗಲಿ. ನಿನ್ನ ಇಚ್ಛೆಯಂತಾಗಲಿ. (ಎಂದು ಅವನ ತೊಡೆಯ ಮೇಲೆ ತಲೆಯಿಟ್ಟು ಮಲಗುವನು..

ಕರ್ಣ: ಅಯ್ಯೋ! ನನ್ನ ಉಭಯ ಸಂಕಟದ ಪರಿಸ್ಥಿತಿಯೆ! ಈ ವರೆಗೆ ನಾನು ಬ್ರಾಹ್ಮಣನೆಂದು ಗುರುಗಳೊಡನೆ ಸುಳ್ಳು ಹೇಳಿ ಧನುರ್ವಿದ್ಯಾಭ್ಯಾಸವನ್ನು ಮಾಡಿದೆ. ಅವರು ಕೂಡ ನನ್ನಲ್ಲಿ ವಿಶ್ವಾಸವಿಟ್ಟರು. ಊರಿಗೆ ಹಿಂತಿರುಗಿ ಹೋಗುವ ಸಮಯದಲ್ಲಾದರೂ ನನ್ನ ಕುಲದ ನಿಜಸ್ಥಿತಿಯನ್ನು ಹೇಳದಿದ್ದರೆ ಗುರುದ್ರೋಹ ಮಾಡಿದಂತಾಗುವುದು. ನಾನು ವಂಚಕನೆಂಬ ಅಪವಾದವು ಆಚಂದ್ರಾರ್ಕವಾಗಿ ಉಳಿಯುವುದು. ಸತ್ಯಾಂಶವನ್ನು ಹೇಳಿದರೆ ಗುರುಗಳು ಕೋಪಗೊಂಡು ಏನುಮಾಡುವರೋ ಏನೋ! ದೇವಾ! ಸದ್ಯದ ಕರ್ತವ್ಯಜ್ಞಾನವನ್ನು ಕರುಣಿಸಿ ಈ ಉಭಯ ಸಂಕಟದಿಂದ ಪಾರುಮಾಡು. (ಎಂದು ಕೈಮುಗಿಯುವನು. ಅಷ್ಟರಲ್ಲಿ ದುರುದುಂಬಿಯೊಂದು ಬಂದು ಅವನ ತೊಡೆಯನ್ನು ಬಲವಾಗಿ ಕೊರೆಯುವುದು. ರಕ್ತವು ಸುರಿಯುವುದು. ನೋವು ಹೆಚ್ಚಾಗುತ್ತಿದ್ದರೂ ಅದನ್ನು ಸಹಿಸಿಕೊಳ್ಳುವನು.)

ಕರ್ಣ: ಹಾಯ್! ಹಾಯ್! ಎಲ್ಲಿಂದ ಬಂತು ಈ ಹಾಳು ತುಂಬಿ? ಈ ನೋವನ್ನು ಸಹಿಸಲಾರೆ! ತೊಡೆಯನ್ನು ಅಲ್ಲಾಡಿಸಿದರೆ ಗುರುಗಳಿಗೆ ನಿದ್ರಾಭಂಗವಾಗುವುದೋ ಏನೋ! ಇದೊಂದು ಸತ್ವಪರೀಕ್ಷೆಯ ಕಾಲ. ಆಹಾ! ರಕ್ತವು ಧಾರಾಕಾರವಾಗಿ ಸುರಿಯುತ್ತಿರುವುದಲ್ಲಾ! ಏನುಮಾಡಲಿ? (ರಕ್ತವು ಪರಶುರಾಮನ ಮೈಗೆ ತಾಗಿ ಅವನಿಗೆ ಎಚ್ಚರವಾಗುವುದು.)

ಪರಶು: (ಸುತ್ತಲೂ ನೋಡಿ) ಕರ್ಣ! ಇದೇನು? ರಕ್ತವೆಲ್ಲಿಂದ ಬಂತು?

ಕರ್ಣ: ಗುರುಗಳೆ! ಕ್ಷಮಿಸಬೇಕು. ನನ್ನ ಗಾಯದ ರಕ್ತ ತಮಗೆ ತಗಲಿತು.

ಪರಶು: ಏನು! ಗಾಯದ ರಕ್ತವೆ? ಎಲ್ಲಿ? ಯಾವ ಗಾಯ? (ಗಾಯವನ್ನು ನೋಡಿ) ಕರ್ಣ! ಇದು ಹೇಗಾಯಿತು?

ಕರ್ಣ: ಗುರುಗಳೇ! ಅದೊ! ಅಲ್ಲಿ ಹಾರಾಡುತ್ತಿದೆಯಲ್ಲಾ, ಆ ದುರುದುಂಬಿ ನನ್ನ ತೊಡೆಯನ್ನು ಬಲವಾಗಿ ಕಡಿಯಿತು. ತಮಗೆ ನಿದ್ರಾಹಾನಿಯಾಗುವುದೆಂದು ನಾನು ಮೈಯನ್ನು ಅಲುಗಾಡಿಸದೆ ನೋವನ್ನು ಸಹಿಸಿಕೊಂಡೆನು.

ಪರಶು: ಹಾ! ಕರ್ಣ! ಈ ಅಸಹನೀಯವಾದ ಯಾತನೆಯನ್ನು ಕ್ಷತ್ರಿಯರಲ್ಲದೆ ಬೇರೆ ಯಾರಿಂದಲೂ ಸಹಿಸಲು ಸಾಧ್ಯವಿಲ್ಲ! ನಾನು ಬ್ರಾಹ್ಮಣ—ಕ್ಷತ್ರಿಯನಲ್ಲವೆಂದು ನನ್ನೊಡನೆ ಸುಳ್ಳುಹೇಳಿ ಧನುರ್ವಿದ್ಯೆಯನ್ನು ಕಲಿತೆಯಾ?

ಕರ್ಣ: (ಕೈಮುಗಿದು) ಗುರುಗಳೇ! ನನ್ನ ಈ ಅಪರಾಧವನ್ನು ಕ್ಷಮಿಸಬೇಕು. ಆದರೆ, ನಾನು ಕ್ಷತ್ರಿಯನಲ್ಲ!

ಪರಶು: ಹಾಗಾದರೆ ನೀನು ಬ್ರಾಹ್ಮಣನೇ? ಬ್ರಾಹ್ಮಣನಿಗೆ ಇಂತಹ ಯಾತನೆಯನ್ನು ಸಹಿಸಿಕೊಳ್ಳುವ ಸಾಮರ್ಥ್ಯವೆಲ್ಲಿಂದ? ನೀನು ಹೇಗೆ ಸಹಿಸಿಕೊಂಡೆ?

ಕರ್ಣ: ಗುರುಗಳೆ! ನಾನು ಬ್ರಾಹ್ಮಣನೂ ಅಲ್ಲ. ನಾನು ಸೂತ ಪುತ್ರನು.

ಪರಶು: ಏನು? ನೀನು ಸೂತಪುತ್ರನೆ? ಅಹಾ, ಕರ್ಣ! ನೀನು ಎಂತಹ ಮೋಸಮಾಡಿದೆ!

ಕರ್ಣ: ಸ್ವಾಮೀ! ತಮ್ಮನ್ನು ಮೋಸಪಡಿಸಬೇಕೆಂದು ನಾನು ಈ ಕಾರ್ಯವನ್ನು ಮಾಡಿದವನಲ್ಲ. ಧನುರ್ವಿದ್ಯೆಯನ್ನು ಅಭ್ಯಾಸಮಾಡ ಬೇಕೆಂಬ ಮಹಾದಾಶೆಯಿಂದ ಈ ಅಪರಾಧವನ್ನು ಮಾಡಬೇಕಾಯಿತು. ಆದರೆ, ಈ ರೀತಿಯ ಒಂದು ಸುಳ್ಳು ಹೇಳಿದ್ದಕ್ಕಾಗಿ ನಾನು ಮನಸ್ಸಿನಲ್ಲಿ ಬಹಳ ಸಂಕಟಪಟ್ಟುಕೊಂಡಿದ್ದೇನೆ. ಸತ್ಯ ಸಂಗತಿಯನ್ನು ಹೇಳಬೇಕೆಂದಿದ್ದರೂ ಅದಕ್ಕೆ ಸಂದರ್ಭ ದೊರೆಯುಲಿಲ್ಲ. ಈಗ ಅದು ತಾನಾಗಿಯೇ ಪ್ರಕಟವಾಯಿತು. ಈ ಗುರುದ್ರೋಹಕ್ಕೆ ತಾವು ಯಾವ ಶಿಕ್ಷೆ ವಿಧಿಸಿದರೂ ನಾನು ಅದಕ್ಕೆ ಸಿದ್ಧನೇ ಆಗಿರುವೆನು!

ಪರಶು: (ಕೋಪದಿಂದ) ಕರ್ಣ! ವಂಚನೆಯ ಫಲವನ್ನು ಅನುಭವಿಸಲು ಸಿದ್ಧನಾಗು! ನಾನು ಹೇಳಿಕೊಟ್ಟ ಶಸ್ತ್ರವಿದ್ಯೆಯೆಲ್ಲವೂ ನಿನ್ನ ಕಡೆಗಾಲದಲ್ಲಿ ನಿಷ್ಫಲವಾಗಲಿ! ನೀನಿನ್ನು ಹೋಗಬಹುದು.

ಕರ್ಣ: ಗುರುಗಳೆ! ಒಂದು ಸುಳ್ಳು ಹೇಳಿದುದರ ಪರಿಣಾಮವು ಈ ರೀತಿ ವಿಪರೀತವಾಯಿತು! ಆದರೆ ಇನ್ನು ಮುಂದೆ—ಪ್ರಾಣಹೋಗುವುದಿದ್ದರೂ ಸರಿಯೆ! ಸುಳ್ಳಾಡುವುದಿಲ್ಲ. ನೀವು ಉಪದೇಶಿಸಿದ ವಿದ್ಯೆಯಿಂದ ನನಗೆ ಆಶ್ರಯಕೊಡುವ ಸ್ವಾಮಿಯನ್ನು ಸೇವಿಸಿ ಕೊನೆಗೆ ಆ ಸ್ವಾಮಿಗಾಗಿಯೇ

ಪ್ರಾಣವನ್ನೂ ಅರ್ಪಿಸುವೆನು. (ನಮಸ್ಕರಿಸುವನು. ಅವನೊಂದು ಕಡೆ, ಇವನೊಂದು ಕಡೆ ಹೋಗುವರು.)

(ಫರದೆ.)

## ದೃಶ್ಯ ೩

(ಸಾಯಂಕಾಲ. ಅದೇ ಕಾಡಿನಲ್ಲಿ ಕರ್ಣನು ಚಿಂತಿಸುತ್ತಾ ಬರುವನು.)

ಕರ್ಣ: ಕೆಸರಿನಲ್ಲಿ ಹುಟ್ಟಿದುದಾದರೂ ಕಮಲವು ದೇವರ ಪೂಜೆಗೆ ಯೋಗ್ಯವಾದುದಾಗಿದೆ. ಎಲ್ಲಾ ಕಡೆಗಳಲ್ಲಿಯೂ ಅದಕ್ಕೆ ಪ್ರಾಶಸ್ತ್ಯವಿದೆ. ಆದರೆ ಸಕಲ ಶಸ್ತ್ರವಿದ್ಯಾಪಾರಂಗತನಾದ ಈ ಸೂತಪುತ್ರನನ್ನು ಯಾರು ಸನ್ಮಾನಿಸುವರು? ಆಹಾ! ಜಾತಿಹೀನನಾದವನ ದುರವಸ್ಥೆಯೆ! ಗುರುಗಳ ಶಾಪಕ್ಕೂ ಈ ಜಾತಿಯೇ ಕಾರಣವಾಯಿತು. ಹಾಗಾದರೆ ಲೋಕದಲ್ಲಿ ಗುಣಕ್ಕೆ ಸಂಭಾವನೆಯಿಲ್ಲವೆ? ನಾನೀಗ ಎಲ್ಲಿ ಹೋಗಲಿ? ಭಗವಾನ್! ಸೂರ್ಯನಾರಾಯಣ! ನೀನೇ ನನಗೆ ದಾರಿ ತೋರಿಸು. (ಸನ್ಯಾಸಿಯೊಬ್ಬನು ಹಾಡುತ್ತಾ ಬರುವನು.)

ಸನ್ಯಾಸಿ: (ಸ್ವಗತ) ಇದಾರು! ಇಲ್ಲಿ ಚಿಂತಿಸುತ್ತಾ ಕುಳಿತಿರುವನು! ಹೆಗಲ ಮೇಲೆ ಬಿಲ್ಲುಬತ್ತಳಿಕೆಗಳಿವೆ. ಕರ್ಣಕುಂಡಲ, ಕವಚ ಮೊದಲಾದ ವಿಶೇಷ ತರದ ಒಡವೆ ವಸ್ತುಗಳಿಂದ ಶೋಭಿಸುತ್ತಿರುವ ಈತನು ಯಾರೋ ಮಹಾಪುರುಷನಾಗಿರಬೇಕು. (ಪ್ರಕಾಶ) ಎಲೈ! ವೀರನೇ! ನೀನು ಯಾರು? ಈ ಕಾಡಿಗೇಕೆ ಬಂದೆ?

ಕರ್ಣ: (ನಮಸ್ಕರಿಸಿ) ಸ್ವಾಮೀ! ನಾನೊಬ್ಬ ದುರದೃಷ್ಟಶಾಲಿಯು! ಮಹತ್ವಾಕಾಂಕ್ಷೆಯುಳ್ಳ ಹೀನಜಾತಿಯವನು.

ಸನ್ಯಾಸಿ: ಉಪ್ಪುನೀರಿನಲ್ಲಿ ಹುಟ್ಟಿದುದಾದರೂ ಮೌಕ್ತಿಕವು ಸರ್ವಸನ್ಮಾನ್ಯವಾಗಿರುವುದು, ಇರಲಿ. ನಿನ್ನ ನಿಜಸ್ಥಿತಿಯನ್ನು ತಿಳಿಯಲಾಶಿಸುವೆನು.

ಕರ್ಣ: ಪೂಜ್ಯರೆ! ನಾನೊಬ್ಬ ಸೂತಪುತ್ರನು. ನನ್ನನ್ನು ಕರ್ಣನೆಂದು ಕರೆಯುವರು. ಭಗವಾನ್ ಪರಶುರಾಮರಲ್ಲಿ ಧನುರ್ವಿದ್ಯೆಯನ್ನು ಅಭ್ಯಾಸಮಾಡಿದ ನಾನು ಹೀನಜಾತಿಯವನಾದ ಕಾರಣ, ಅವರ ಶಾಪಕ್ಕೆ ಗುರಿಯಾದೆನು. ಈಗ ಕಿಂಕರ್ತವ್ಯಮೂಢನಾಗಿರುವೆನು.

ಸನ್ಯಾಸಿ: (ಸ್ವಲ್ಪಹೊತ್ತು ಆಲೋಚಿಸಿ) ಕರ್ಣ! ನೀನೇನೂ ಚಿಂತಿಸಬೇಡ, ನಿನ್ನ ಎಲ್ಲ ಗುಣಗಳೂ ಸಂಭಾವನೆಗೆ ಯೋಗ್ಯಗಳಾಗಿವೆ. ನಿನ್ನ

ಎಲ್ಲ ವಿಷಯಗಳನ್ನೂ ನಾನರಿತೆನು. ಮುಂದಿನ ಕರ್ತವ್ಯವನ್ನು ನಾನು ನಿನಗೆ ತಿಳುಹಿಸುವೆನು. ಹಸ್ತಿನಾವತಿ ನಗರದಲ್ಲಿ ಪಾಂಡವರ ಮತ್ತು ಕೌರವರ ಧನುರ್ವಿದ್ಯೆಯ ಪರೀಕ್ಷಾಸಮಾರಂಭವೊಂದು ಜರಗಲಿರುವುದು. ಭೀಷ್ಮ, ದ್ರೋಣ ಮೊದಲಾದವರು ಅದರ ಸಂಚಾಲಕರು. ನೀನಲ್ಲಿಗೆ ಹೋಗು. ನಿನ್ನ ಶಸ್ತ್ರವಿದ್ಯೆಗೂ ಅಲ್ಲಿ ಬಹುಮಾನ ದೊರಕೀತು.

ಕರ್ಣ: ಪೂಜ್ಯರೇ, ಉಪಕೃತನಾದೆನು. ಆದರೆ, ಆ ಶ್ರೇಷ್ಠಕುಲದ ರಾಜಪುತ್ರರ ಸಮೂಹದಲ್ಲಿ ಸೂತಪುತ್ರನಾದ ನನಗೆ ಸ್ಥಾನವೆಲ್ಲಿ? ಜಾತಿ ಹೀನನಿಗೆ ಅಲ್ಲಿ ಸ್ಥಾನಮಾನಗಳು ದೊರಕುವುದು ಅಸಂಭವ.

ಸನ್ಯಾಸಿ: ಹಾಗೆ ನಿರಾಶನಾಗಬೇಡ. ಇತರರ ಮಾತು ಹಾಗಿರಲಿ. ಧೃತರಾಷ್ಟ್ರಪುತ್ರನಾದ ದುರ್ಯೋಧನನು ಗುಣೈಕಪಕ್ಷಪಾತಿಯು. ಅವನು ನಿನ್ನ ಅಸಾಮಾನ್ಯ ಚಾಪವಿದ್ಯಾನೈಪುಣ್ಯವನ್ನು ಕಂಡು ಯೋಗ್ಯತೆಗೆ ತಕ್ಕ ಪುರಸ್ಕಾರವನ್ನು ಕೊಡದಿರನು. ಧೈರ್ಯಸ್ಥನಾಗಿ ಅಲ್ಲಿಗೆ ಹೋಗು.

ಕರ್ಣ: ಸ್ವಾಮೀ! ಅನುಗೃಹೀತನಾದೆನು. (ನಮಸ್ಕರಿಸುವನು. ಇಬ್ಬರೂ ಹೊರಡುವರು.)

(ಪರದೆ ಬೀಳುವುದು.)

(ನೇಪಥ್ಯದ ಮಾತು:—ದುರ್ಯೋಧನನಿಂದ ಅನುಗೃಹೀತವಾಗಿ ಕರ್ಣನು ಅಂಗರಾಜ್ಯವನ್ನು ಪಡೆದು ಚಕ್ರವರ್ತಿಯ ಪ್ರಾಣಸಖನಾಗಿ ಮೆರೆಯುತ್ತಿದ್ದನು. ವನವಾಸ—ಅಜ್ಞಾತವಾಸಗಳನ್ನು ಅನುಭವಿಸಿ ಬಂದ ಪಾಂಡವರು ಯುದ್ಧಸನ್ನದ್ಧರಾದರು. ಹತ್ತು ದಿವಸಗಳ ಭಾರತಯುದ್ಧವು ಕಳೆಯಿತು. ದ್ರೋಣಾಚಾರ್ಯರೂ ಪರಾಜಿತರಾದರು. ಕರ್ಣನು ಸೇನಾಧಿಪತ್ಯವನ್ನು ವಹಿಸಿಕೊಂಡನು.)

## ದೃಶ್ಯ ೪.

(ಬೆಳಗಿನ ಸಮಯ. ಗಂಗಾತೀರದಲ್ಲಿ ಕರ್ಣನು ತನ್ನ ನಿತ್ಯಕರ್ಮಗಳನ್ನು ತೀರಿಸಿ ಆಲೋಚನಾಮಗ್ನನಾಗುವನು.)

ಕರ್ಣ: ಆಹಾ! ನನ್ನ ಭಾಗ್ಯವೆ! ಜಾತಿಹೀನತೆಯಿಂದ ಉಂಟಾದ ಹೃದಯವೇದನೆಯು ದುರ್ಯೋಧನನ ಉದಾರಬುದ್ಧಿಯಿಂದಾಗಿ ಪರಿಹೃತವಾಯಿತು. ನನ್ನನ್ನು ಪ್ರಾಣಸಖನಂತೆಯೇ ತಿಳಿದು ಯೋಗ್ಯವಾಗಿ

ಸನ್ಮಾನಿಸಿ ಅಂಗರಾಜ್ಯಪದವಿಯನ್ನೊಪ್ಪಿಸಿದನು. ಎಲ್ಲವೂ ತೃಪ್ತಿಕರವಾಗಿ ನಡೆದಿರಲು—ಸಂಧಾನಕ್ಕಾಗಿ ಬಂದ ಪಾಂಡವರ ರಾಯಭಾರಿ ಶ್ರೀಕೃಷ್ಣನು ನನ್ನ ಕುಲಶೀಲಗಳ ಸತ್ಯಾಂಶವನ್ನು ತಿಳುಹಿಸಿ ಧರ್ಮಸಂಕಟಕ್ಕೆ ಗುರಿಪಡಿಸಿದನು. ಕೃಷ್ಣನು ನನ್ನನ್ನು ನಾನಾರೀತಿಯಲ್ಲಿ ಪ್ರಲೋಭನಗೊಳಿಸಿರುವನು. ದುರ್ಯೋಧನ ಪಕ್ಷವನ್ನು ತ್ಯಜಿಸಿ ತಮ್ಮಂದಿರಾದ ಪಾಂಡವರನ್ನು ಉದ್ಧರಿಸುವುದು ಯೋಗ್ಯವಂತೆ! ಉಭಯಪಕ್ಷದವರಿಂದಲೂ ಆಶಿಸಲ್ಪಟ್ಟ ಚಕ್ರವರ್ತಿಪದವು ನನಗೆ ದೊರಕುವುದಂತೆ! ಆಹಾ! ಕೃಷ್ಣನ ಕುಟಿಲ ಕಾರಸ್ಥಾನವೆ! ನನಗೆ ಆಶ್ರಯಕೊಟ್ಟ ದುರ್ಯೋಧನನ ಪಕ್ಷವನ್ನು ನಾನೆಂದೂ ಬಿಡಲಾರೆ. ನಾನು ಈ ಪ್ರಾಣವನ್ನಾದರೂ ಯುದ್ಧಭೂಮಿಯಲ್ಲಿ ಸಮರ್ಪಿಸುವೆನಲ್ಲದೆ ಸ್ವಾಮಿದ್ರೋಹವನ್ನು ಮಾಡಲಾರೆ. ಇದೇ ನನ್ನ ಪ್ರತಿಜ್ಞೆ.

(ಕುಂತಿಯು ಮ್ಲಾನವದನಳಾಗಿ ಪ್ರವೇಶಿಸುವಳು. ಕರ್ಣನು "ಅಮ್ಮಾ!" ಎಂದು ನಮಸ್ಕರಿಸುವನು.)

ಕುಂತಿ: ಕಂದಾ! ಎದ್ದೇಳು ನಾನು ಮಾಡಿದ ಕರ್ಮವು ನನ್ನನ್ನೇ ದಹಿಸುತ್ತಾ ಇದೆ. ನಿನ್ನ ಜನನಕಾಲದಲ್ಲಿ ಸ್ವಲ್ಪವಾದರೂ ನಾನು ಪೂರ್ವಾಪರ ವಿವೇಚನೆಮಾಡುತ್ತಿದ್ದರೆ ಇಂತಹ ದುರವಸ್ಥೆಯು ಬರುತ್ತಿರಲಿಲ್ಲ.

ಕರ್ಣ: ಅಮ್ಮಾ! ಇದೆಲ್ಲವೂ ನನ್ನ ದುರದೃಷ್ಟ. ಕ್ಷತ್ರಿಯಪುತ್ರನಾಗಿದ್ದರೂ ಸೂತಪುತ್ರನೆಂಬ ಅವಮಾನಕ್ಕೆ ಗುರಿಯಾಗಬೇಕಾಯಿತು. ಹೋಗಲಿ. ಅದಕ್ಕಾಗಿ ಈಗ ಚಿಂತಿಸಿ ಫಲವಿಲ್ಲ. ಈಗಲಾದರೂ ನಾನು ಸತ್ಕುಲಪ್ರಸೂತನೆಂದು ಹೆಮ್ಮೆಪಡಬಹುದಲ್ಲವೆ?

ಕುಂತಿ: ಮಗು! ಅದೆಲ್ಲ ಸರಿ. ಈಗ ಸಹೋದರರೇ ಪರಸ್ಪರ ಯುದ್ಧ ಮಾಡಬೇಕಾಯಿತಲ್ಲವೆ? ದುರ್ಯೋಧನನ ಪಕ್ಷವನ್ನು ವಹಿಸಿ ಅನುಜರಾದ ಪಾಂಡವರೊಡನೆ ಹೊಯ್ದಾಡಬೇಕಾಯಿತಲ್ಲವೆ? ಮೊದಲು ಪರಸ್ಪರ ಸಂಬಂಧವು ನಿನಗೆ ತಿಳಿದಿರಲಿಲ್ಲ. ಈಗ ಎಲ್ಲವೂ ತಿಳಿದಿದೆಯಷ್ಟೆ! ಇನ್ನಾದರೂ ಪಾಂಡವರ ಪಕ್ಷವನ್ನು ವಹಿಸಬಾರದೆ?

ಕರ್ಣ: ಅಮ್ಮಾ! ಅದು ಹೇಗೆ ಸಾಧ್ಯವಾದೀತು? ನನ್ನನ್ನೇ ನಂಬಿರುವ ಸ್ವಾಮಿಗೆ ಇಂತಹ ವಿಪತ್ಕಾಲದಲ್ಲಿ ದ್ರೋಹವನ್ನು ಮಾಡಲು ಉಪದೇಶಿಸುವೆಯಾ? ಅದರಿಂದ ಕುಲಕ್ಕೇನೇ ಕಳಂಕ ಬರಬಹುದಲ್ಲವೇ? ಆ ಕೆಲಸ ಎಂದಿಗೂ ಸಾಧ್ಯವಿಲ್ಲವಮ್ಮ, ಸಾಧ್ಯವಿಲ್ಲ.

ಕುಂತಿ—ಹಾಗಾದರೆ ನಿನ್ನ ಪ್ರಾಣಸ್ನೇಹಿತನಾದ ದುರ್ಯೋಧನನಿಗೆ ಬುದ್ಧಿಹೇಳಿ ಈ ಯುದ್ಧವನ್ನೇ ನಿಲ್ಲಿಸಬಹುದಲ್ಲವೆ?

ಕರ್ಣ: ಅಮ್ಮಾ! ಅದು ಕೂಡಾ ಅಸಾಧ್ಯವಾದ ಕೆಲಸ. ಈ ದಾಯಾದಿಗಳ ದ್ವೇಷವು ಯುದ್ಧದಿಂದಲೇ ಪರಿಸಮಾಪ್ತಿಯಾಗಬೇಕಲ್ಲದೆ ಬೇರಾವ ಉಪದೇಶದಿಂದಲೂ ನಿವಾರಿಸತಕ್ಕುದಲ್ಲ. ದುರ್ಯೋಧನನ ಈ ಯುದ್ಧನಿಶ್ಚಯವನ್ನು ವಿರೋಧಿಸುವ ಧೈರ್ಯ ನನಗಿಲ್ಲ. ಅಲ್ಲದೆ ಈ ದೇಹವಿರುವ ತನಕ ಆತನ ಆಜ್ಞೆಯನ್ನು ಮೀರಲಾರೆ.

ಕುಂತಿ: ಕರ್ಣ! ವೀರರಿಗೆ ತಕ್ಕುದಾದ ಮಾತನ್ನೇ ಆಡಿದೆ. ಆದರೆ ಯುದ್ಧದಲ್ಲಿ ಪಾಂಡವರ ಪ್ರಾಣಗಳನ್ನು ಉಳಿಸಬೇಕೆಂದು ನಾನು ಬೇಡಿ ಕೊಳ್ಳುತ್ತೇನೆ.

ಕರ್ಣ: (ಸ್ವಲ್ಪ ಆಲೋಚಿಸಿ) ಅಮ್ಮಾ! ಅರ್ಜುನನನ್ನು ಯುದ್ಧದಲ್ಲಿ ಖಂಡಿತವಾಗಿಯೂ ಕೊಲ್ಲುವೆನೆಂದು ನನ್ನ ಸ್ವಾಮಿಗೆ ಮಾತುಕೊಟ್ಟಿರು ತ್ತೇನೆ. ಆದ್ದರಿಂದ ಆತನೊಬ್ಬನನ್ನು ಬಿಟ್ಟು ಉಳಿದ ನಾಲ್ಕು ಮಂದಿಯಲ್ಲಿ ಯಾರನ್ನೂ ನಾನು ಸಂಹರಿಸುವುದಿಲ್ಲ.

ಕುಂತಿ: ಅರ್ಜುನನನ್ನು ಕಳೆದುಕೊಂಡು ನಾನು ಹೇಗೆ ಜೀವಿಸಲಿ?

ಕರ್ಣ: ಅಮ್ಮಾ! ಹೇಗೂ ಪಾಂಡವರು ಒಟ್ಟು ಐದುಮಂದಿಯಷ್ಟೆ! ಆದ್ದರಿಂದ ನಾನು—ಅರ್ಜುನ—ಈ ನಮ್ಮಿಬ್ಬರಲ್ಲಿ ಯಾರಾದರೊಬ್ಬನು ಅಳಿದರೂ—ಯಾರಾದರೂ ಒಬ್ಬರು ಉಳಿದರೂ ಪಾಂಡವರು ಐದುಮಂದಿ ಯಾದಂತೇ ಆಗುವುದಿಲ್ಲವೆ?

ಕುಂತಿ: ಕರ್ಣ! ನೀನೂ ಅರ್ಜುನನೂ ಇಬ್ಬರೂ ನನ್ನ ಮಕ್ಕಳಲ್ಲವೇ? ನಿಮ್ಮಿಬ್ಬರಲ್ಲಿ ಒಬ್ಬನು ನಾಶಹೊಂದಿದರೂ ಹೆತ್ತಕರುಳಿಗೆ ಯಾತನೆಯಾಗ ಲಿಕ್ಕಿಲ್ಲವೇ? ಈ ಸಮಸ್ಯೆಯನ್ನೂ ಹೇಗೆ ಬಗೆಹರಿಸಲಿ?

ಕರ್ಣ: ನನಗಾವ ಉಪಾಯವೂ ತೋರುವುದಿಲ್ಲ ನೀನು ಯಾರಾದ ಕೊಬ್ಬನ ಮರಣದುಃಖವನ್ನು ಅನುಭವಿಸಲು ಸಿದ್ಧಳಾಗಿಯೇ ತೀರಬೇಕು.

ಕುಂತಿ: (ಸ್ವಲ್ಪ ಯೋಚಿಸಿ) ಕರ್ಣ! ನಿನ್ನ ಸಂಕಲ್ಪವನ್ನು ಬದಲಾ ಯಿಸಲು ಸಾಧ್ಯವಿಲ್ಲವೆಂದು ಹೇಳುವೆಯಲ್ಲವೆ? ಆಗಲಿ ಆದರೆ ನೀನು ಯುದ್ಧಮಾಡುವಾಗ ಒಂದು ಬಾರಿ ತೊಟ್ಟ ಬಾಣವನ್ನು ಇನ್ನೊಮ್ಮೆ ತೊಡು

ವುದಿಲ್ಲವೆಂದು ನನಗೆ ಮಾತುಕೊಡಬೇಕು. ಆದರಿಂದ ಸ್ವಲ್ಪವಾದರೂ ನನ್ನ ಮನಸ್ಸಿಗೆ ಶಾಂತಿದೊರಕೀತು.

ಕರ್ಣ: (ಸಂತೋಷದಿಂದ) ಆಗಬಹುದಮ್ಮ! ಇನ್ನಾದರೂ ನೀನು ನಿಶ್ಚಿಂತಳಾಗಿರು. ಈ ವರೆಗೆ ನಾನು ಮಾತೃವಾತ್ಸಲ್ಯದಿಂದ ವಂಚಿತನಾಗಿದ್ದೆನು. ಈಗಲಾದರೂ ನನ್ನನ್ನು ಮನಃಪೂರ್ವಕವಾಗಿ ಆಶೀರ್ವದಿಸಬೇಕೆಂದು ಬೇಡಿಕೊಳ್ಳುವೆನು. (ಕಾಲಿಗೆರಗುವನು.)

ಕುಂತಿ: (ಸಂತೋಷದಿಂದ ಮೈದಡವಿ) ಕರ್ಣಾ! ಕೀರ್ತಿವಂತನಾಗು. ನಿನ್ನ ಸದ್ಗುಣಗಳು ಜಗತ್ತಿನಲ್ಲಿ ಕೊಂಡಾಡಲ್ಪಡಲಿ! ನಾನಿನ್ನು ಹೋಗುವೆನು. (ಹೊರಡುವಳು.)

(ಪರದೆ)

## ದೃಶ್ಯ ೫

(ರಣಭೂಮಿ. ಯುದ್ಧ ಸನ್ನದ್ಧನಾದ ಕರ್ಣನು ಚಾಟಿ ಹಿಡಿದ ಶಲ್ಯನೊಂದಿಗೆ ಪ್ರವೇಶಿಸುವನು.)

ಕರ್ಣ: ಅರ್ಜುನನಿಗೆ ನಿಪುಣನಾದ ಕೃಷ್ಣನು ಸಾರಥಿಯಾಗಿರುವಂತೆ, ನಿನ್ನೆ ನನಗೆ ಯೋಗ್ಯ ಸಾರಥಿ ಇದ್ದಿಲ್ಲವಾದ ಕಾರಣ ಯುದ್ಧದಲ್ಲಿ ಜಯಾಪಜಯ ನಿಶ್ಚಯವಾಗಲಿಲ್ಲ. ಇಂದಾದರೋ ರಥ ನಡೆಯಿಸುವುದರಲ್ಲಿ ಕೃಷ್ಣನಿಗಿಂತಲೂ ಶ್ರೇಷ್ಠನಾದ ನೀನು ಸಾರಥಿಯಾದ ಮೇಲೆ ಖಂಡಿತವಾಗಿಯೂ ಜಯಲಕ್ಷ್ಮಿಯು ನನ್ನನ್ನೇ ಒಲಿಯುವಳು.

ಶಲ್ಯ: ಕರ್ಣ, ಅದೆಲ್ಲ ಸರಿ. ಆದರೆ ಅರ್ಜುನನು ತನ್ನ ಸಾರಥಿಯ ಮಾತನ್ನು ಹೇಗೆ ಮೀರುವುದಿಲ್ಲವೋ ಹಾಗೆಯೇ ನೀನೂ ಕೂಡ ನ್ಯಾಯವಾದ ನನ್ನ ಮಾತಿಗೆ ವಿರೋಧವಾಗಿ ನಡೆಯಬಾರದು. ನನ್ನ ಮಾತಿಗೆ ಒಪ್ಪದ ಸಂದರ್ಭದಲ್ಲಿ ನಾನು ಕೂಡಲೇ ಚಾಟಿಯನ್ನು ಬಿಸಾಡಿ ಹೊರಟು ಬರುವೆನು. ಇದಕ್ಕೆ ನೀನು ಒಪ್ಪುವೆಯಷ್ಟೆ!

ಕರ್ಣ: ಶಲ್ಯ! ನೀನಂದುದಕ್ಕೆ ನಾನೆಂದೂ ವಿರೋಧಿಯಾಗಲಾರೆನು. ನ್ಯಾಯವು ಸರ್ವಸಮ್ಮತವಷ್ಟೆ! ಅದೊ! ಕಹಳೆಯ ಸದ್ದು ಕೇಳಿಸುತ್ತಿರುವುದು. ನಾವು ಯುದ್ಧರಂಗದ ಕಡೆಗೆ ಮುಂದುವರಿಯುವ. (ಮುಂದೆ

ಹೋಗುವರು. ತೆರೆಯ ಹಿಂದಿನಿಂದ "ಕರ್ಣಾ! ಕರ್ಣಾ!" ಎಂಬ ಕರೆಯು ಕೇಳಬರುವುದು. ಬ್ರಾಹ್ಮಣನೊಬ್ಬನು ವೇಗವಾಗಿ ಬರುವನು.)

ಕರ್ಣ: ಸ್ವಾಮೀ! ತಾವು ಯಾರು? ಯಾವುದಕ್ಕಾಗಿ ನನ್ನನ್ನು ಹುಡುಕಿಕೊಂಡು ಬಂದಿರಿ?

ಬ್ರಾಹ್ಮಣ: ಕರ್ಣಾ! ನೀನು ದಾನಶೂರನೆಂದು ಕೇಳಿರುವೆನು. ನಾನು ಬರುವಾಗ ಸ್ವಲ್ಪ ತಡವಾಯಿತು. ಅರಮನೆಯಲ್ಲಿ ನಿನ್ನ ಸಂದರ್ಶನ ವಾಗದೆ ಇತ್ತ ಹುಡುಕಿಕೊಂಡು ಬಂದೆ. ಬಡವನಾದ ನನ್ನ ಮೇಲೆ ದಯೆಯಿಟ್ಟು ಏನನ್ನಾದರೂ ಅನುಗ್ರಹಿಸಬೇಕು.

ಕರ್ಣ: ನಾನು ನಿಮಗೆ ಏನನ್ನು ಕೊಡಲಿ? ಗೋದಾನದಿಂದ ನಿಮಗೆ ತೃಪ್ತಿಯಾದೀತೇ? ಸುವರ್ಣದಲ್ಲಿ ಆಶೆಯಿದೆಯೇ? ಅಥವಾ ಭೂಸಂಪತ್ತಿನಿಂದ ಸಂತೋಷವಾದೀತೇ? ನಿಮಗೆ ಇಷ್ಟವಾದುದನ್ನು ತಿಳುಹಿಸಿರಿ.

ಬ್ರಾಹ್ಮಣ: ಅವುಗಳಲ್ಲೆಲ್ಲಾ ನನಗೆ ಆಶೆಯಿಲ್ಲ. ನೀನು ಕೊಡುವುದಾದರೆ ನಿನ್ನ ಕರ್ಣ ಕುಂಡಲಗಳನ್ನು ಕೊಡು. ಅದರಿಂದ ನನಗೆ ತೃಪ್ತಿಯಾಗುವುದು.

ಕರ್ಣ: (ಸಂತೋಷದಿಂದ) ಪೂಜ್ಯರೇ! ನಾನಿಂದು ಧನ್ಯನಾದೆ. ಬೇರೆ ಎಲ್ಲ ವಸ್ತುಗಳೂ ಸ್ವಾಮಿಯಾದ ದುರ್ಯೋಧನನಿಂದ ಪಡೆದವುಗಳು. ಈ ಕುಂಡಲಗಳು ನನ್ನವೇ ಆಗಿವೆ. ಇವುಗಳನ್ನು ಮನಃಪೂರ್ವಕವಾಗಿ ಈಗಲೇ ನಿಮಗೆ ಅರ್ಪಿಸುತ್ತೇನೆ. (ಕುಂಡಲಗಳನ್ನು ತೆಗೆದು) ಪೂಜ್ಯರೆ! ಇಲ್ಲಿ ಬೇರೆ ನೀರಿಲ್ಲ. ಇದೊ! ನನ್ನ ಸಂತೋಷದ ಕಣ್ಣೀರನ್ನೇ ಧಾರೆಯೆರೆದು ಈ ಕುಂಡಲಗಳನ್ನು ಸಮರ್ಪಿಸುವೆನು. ಕೃಪೆಯಿಟ್ಟು ಇವುಗಳನ್ನು ಸ್ವೀಕರಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕು. (ಕೊಟ್ಟು ನಮಸ್ಕಾರ ಮಾಡುವನು.)

ಬ್ರಾಹ್ಮಣ: (ಸಂತೋಷದಿಂದ) ಕರ್ಣಾ! ನೀನು ಶ್ರೇಯೋವಂತನಾಗು. ನಿನ್ನನ್ನು ದಾನಶೂರನೆಂದು ಎಲ್ಲರೂ ಕೊಂಡಾಡಲಿ (ಹೋಗುವನು)

ಶಲ್ಯ: ಕರ್ಣ! ನಿನ್ನ ಆತ್ಮಸಂರಕ್ಷಣೆಗೆ ಕಾರಣಗಳಾದ— ಅತ್ಯಮೂಲ್ಯಗಳಾದ ಈ ಕುಂಡಲಗಳನ್ನು ಈ ರೀತಿ ಪೂರ್ವಾಪರ ಯೋಚನೆಯಿಲ್ಲದೆ ಕೊಡಬಹುದೆ?

ಕರ್ಣ: ಅತಿ ಪ್ರಿಯವಾದುದನ್ನೇ ದಾನಮಾಡಬೇಕೆಂದು ಶಾಸ್ತ್ರಗಳು ಹೇಳುತ್ತಿವೆ. ಅದಲ್ಲದೆ ಕೇಳಿದುದನ್ನು ಕೊಡುವುದರಲ್ಲಿ ಹಿಂಜರಿಯು

ಬಾರದು. ಈ ವರೆಗೆ ನಾನು ಯಾಚಕರ ಯಾವ ಯಾಚನೆಯನ್ನೂ ನಿರಾಕರಿಸಲಿಲ್ಲ. ಇಂದು ಅದೇ ನಿಯಮವನ್ನು ಪರಿಪಾಲಿಸಿ ಧನ್ಯನಾದೆ. ಆದರಿಂದಲೇ ನನಗೆ ತೃಪ್ತಿ.

ಶಲ್ಯ: ಅಹುದು. ಆದರೆ ಈ ಘೋರ ಸಂಗ್ರಾಮದಲ್ಲಿ ಅವುಗಳೇ ನಿನ್ನ ಅಂಗರಕ್ಷಕಗಳಾಗಿದ್ದುವು. ಮುಂದೆ ನಿನ್ನ ಗತಿಯೇನು?

ಕರ್ಣ: ಶಲ್ಯ! ಅದಕ್ಕಾಗಿ ನೀನೇನೂ ಹೆದರಬೇಕಾಗಿಲ್ಲ. ಸ್ವಾಮಿಯು ಕೊಟ್ಟಿರುವ ಈ ಕಿರೀಟವೂ ಕೈಯಲ್ಲಿರುವ ಬಿಲ್ಲು ಬಾಣಗಳೂ ಬಾಹು ಬಲವೂ ನನ್ನ ಅಂಗರಕ್ಷೆಗೆ ಕಾರಣಗಳಾಗಿರುವುವಲ್ಲದೆ ಈ ಉಡಿಗೆ ತೊಡಿಗೆಗಳಿಂದ ಯಾವ ಪುರುಷಾರ್ಥವಾದೀತು? ಇರಲಿ. ರಥವು ಸಿದ್ಧವಾಗಿದೆಯೋ? ಮುಂದೆ ಹೋಗೋಣ.

ಶಲ್ಯ: ಇದೊ! ಸಿದ್ಧವಾಗಿದೆ. (ಕರ್ಣನು ರಥಾರೋಹಣವನ್ನು ಅಭಿನಯಿಸುವನು.)

ಕರ್ಣ: ಶಲ್ಯ! ಅದೋ! ನೋಡು! ಅರ್ಜುನನ ರಥವು ಬರುತ್ತಿದೆ. ಅದಕ್ಕೆದುರಾಗಿ ನನ್ನ ರಥವನ್ನೂ ನಡೆಯಿಸು. (ಶಲ್ಯನು ರಥವನ್ನು ಮುಂದೆ ನಡೆಸುವನು. ಕೃಷ್ಣನೂ ಅರ್ಜುನನೂ ರಥಾರೂಢರಾಗಿ ಬರುವರು.)

ಅರ್ಜುನ: ಕೃಷ್ಣ! ಅದೋ ಕರ್ಣನನ್ನು ಕಂಡೆಯಾ! ಇದೇನು? ಕರ್ಣಕುಂಡಲಗಳು ಕಾಣುವುದಿಲ್ಲವಲ್ಲಾ? ಏನಾದುವು?

ಕೃಷ್ಣ: ಏನಾದುವೋ ನಾನರಿಯೆ! ದಾನಶೂರನಲ್ಲವೇ? ಯಾರಿಗಾದರೂ ಅವುಗಳನ್ನು ದಾನಮಾಡಿದನೋ ಏನೋ!

ಅರ್ಜುನ: ಒಳ್ಳೆಯದಾಯಿತು. ಕುಂಡಲರಹಿತನಾದ ಕರ್ಣನನ್ನು ಹೆಚ್ಚು ಪ್ರಯಾಸವಿಲ್ಲದೆ ಗೆಲ್ಲಬಹುದಲ್ಲವೇ?

ಕೃಷ್ಣ: ಯುದ್ಧದ ಸಮಯದಲ್ಲಿ ತಾನಾಗಿಯೇ ಗೊತ್ತಾಗುವುದಷ್ಟೆ!

(ಕರ್ಣಾರ್ಜುನರ ರಥಗಳು ಸಮೀಪವಾಗುವುವು.)

ಅರ್ಜುನ: ಎಲೈ ಕರ್ಣ! ನಿನ್ನನ್ನು ನನಗೆ ಬಲಿ ಕೊಡುವುದಕ್ಕಾಗಿಯೇ ದುರ್ಯೋಧನನು ಈ ವರೆಗೆ ಸಾಕಿದನೆಂದು ತೋರುತ್ತದೆ. ನಿನ್ನ ಮಗ ವೃಷಸೇನನನ್ನೂ ನಿನ್ನ ಪ್ರಭುವಿನ ಸೋದರ ದುಶ್ಶಾಸನನನ್ನೂ ಬಲಿ ತೆಗೆದುಕೊಂಡಾಯಿತು. ಈಗ ನಿನ್ನ ಸರದಿಯು ಬಂದಿದೆ.

ಕರ್ಣ: ಅರ್ಜುನ! ಡಂಭಾಚಾರದ ಮಾತುಗಳನ್ನೆಲ್ಲ ಕಟ್ಟಿಡು. ಬೃಹನ್ನಳೆಯ ಪಾತ್ರವನ್ನು ಧರಿಸಿದವನಿಗೆ ಹೆಣ್ಣಿನಂತೆ ಹರಟುವ ಸ್ವಭಾವವೂ ಬಾರದೆ ಹೋದೀತೇ? ಇರಲಿ. ಮಾತನಾಡುವುದಕ್ಕೆ ಈಗ ಅವಕಾಶವಿಲ್ಲ. ಇಬ್ಬರೂ ಹಟತೊಟ್ಟು ನಿಂತಿದ್ದೇವೆ. ಯುದ್ಧವು ಮೊದಲಾಗಲಿ. ಸೋಲು ಗೆಲವುಗಳನ್ನು ಆ ಪರಮಾತ್ಮನೇ ನಿಷ್ಕರ್ಷಿಸಲಿ. (ಇಬ್ಬರೂ ಯುದ್ಧಕ್ಕೆ ತೊಡಗುವರು.)

ಅರ್ಜುನ: ಕರ್ಣ! ಸಾಮಾನ್ಯ ಅಸ್ತ್ರಗಳಿಗೆ ನೀನು ಬಗ್ಗುವವನಲ್ಲ. ಇದೊ! ಬ್ರಹ್ಮಾಸ್ತ್ರವನ್ನು ಪ್ರಯೋಗಿಸುವೆನು. ತಡೆದುಕೊ. (ಬಾಣ ಬಿಡುವನು.)

ಕರ್ಣ: ಅರ್ಜುನ! ಇಂತಹ ಬ್ರಹ್ಮಾಸ್ತ್ರಗಳನ್ನು ಎಷ್ಟೋ ಖಂಡಿಸಿರುವೆನು. ಇದೊ! ನಿನ್ನ ಬ್ರಹ್ಮಾಸ್ತ್ರವನ್ನು ಖಂಡಿಸಿ ಪ್ರತಿಯಾಗಿ ಸರ್ಪಾಸ್ತ್ರವನ್ನು ಪ್ರಯೋಗಿಸುವೆನು. (ಶಸ್ತ್ರವನ್ನು ಹೊರತೆಗೆದು) ಶಲ್ಯ! ಈ ಸರ್ಪಾಸ್ತ್ರವನ್ನು ನೋಡಿದೆಯಾ! ಇದು ಪಾರ್ಥನ ಪ್ರಾಣವನ್ನು ಹೀರದೆ ಇದ್ದೀತೆ?

ಶಲ್ಯ: ಭಲಾ ಕರ್ಣ! ಈ ಅಸ್ತ್ರವು ಖಂಡಿತವಾಗಿಯೂ ಪಾರ್ಥನನ್ನು ಧರೆಗುರುಳಿಸದೆ ಬಿಡದು. ಆದರೆ–ಕರ್ಣ! ಈ ಅಸ್ತ್ರವನ್ನು ನೀನು ಅರ್ಜುನನ ಕೊರಳಿಗೆ ಗುರಿಯಿಟ್ಟಿರುವೆಯಷ್ಟೆ! ಅದೆಲ್ಲಿಯಾದರೂ ಗುರಿತಪ್ಪಿ ಅವನ ಕಿರೀಟಕ್ಕೆ ತಗಲಿದರೆ ಕಾರ್ಯವು ವ್ಯರ್ಥವಾದೀತು. ನಿನ್ನ ಗುರಿಯನ್ನು ಅವನ ಎದೆಗೆ ಸರಿಯಾಗಿ ಇಡು. ಇದರಿಂದ ನಿನಗೆ ಜಯವಾಗುವುದು ಖಂಡಿತ.

ಕರ್ಣ: ಶಲ್ಯ! ನೀನು ಭಯಪಡುವ ಅವಶ್ಯಕತೆಯಿಲ್ಲ. ನನ್ನ ಬಾಣಗಳು ಈ ವರೆಗೆ ಗುರಿತಪ್ಪಲಿಲ್ಲ. ಇನ್ನೂ ತಪ್ಪಲಾರವು. ಅದಲ್ಲದೆ ಇಟ್ಟ ಗುರಿಯನ್ನು ಹಿಂತೆಗೆಯುವುದೂ ನನ್ನ ಅಪಯಶಸ್ಸಿಗೆ ಕಾರಣವಾದೀತು. ನೋಡು, ನನ್ನ ಬಾಣಪ್ರಯೋಗವನ್ನು! (ಎಂದು ಬಾಣಬಿಡುವನು.) ಕೃಷ್ಣನು ರಥವನ್ನು ಜಗ್ಗಿಸಿದ ಕಾರಣ ಬಾಣವು ಅರ್ಜುನನ ಕಿರೀಟವನ್ನು ಹಾರಿಸುವುದು. ಸರ್ಪಾಸ್ತ್ರವು ಪುನಃ ಕರ್ಣನ ಬತ್ತಳಿಕೆಗೆ ಬಂದು ಸೇರುವುದು. ಎಲ್ಲರೂ ಆಶ್ಚರ್ಯಪಡುವರು.)

ಶಲ್ಯ: ಕರ್ಣ! ಪ್ರಯೋಗವು ಸಫಲವಾಗಲಿಲ್ಲ. ನೀನು ಬಿಟ್ಟ ಅಸ್ತ್ರವು ಪುನಃ ನಿನ್ನ ಬತ್ತಳಿಕೆಗೆ ಸೇರಿರುವುದು. ಈಗಲಾದರೂ ನಾನು

ಹೇಳಿದಂತೆ ಅರ್ಜುನನ ಎದೆಗೆ ಗುರಿಯಿಟ್ಟು ಹೊಡೆ. ಖಂಡಿತವಾಗಿಯೂ ಈಗ ನೀನು ಗೆಲ್ಲುವೆ. ತಡಮಾಡಬೇಡ. ಅದೇ ಬಾಣವನ್ನು ಪುನಃ ಪ್ರಯೋಗಿಸು.

ಕರ್ಣ: (ಸ್ವಲ್ಪಹೊತ್ತು ಆಲೋಚಿಸಿ) ಆಹಾ! ಈಗ ಗೊತ್ತಾಯಿತು. ಈ ಬಾಣವು ನನ್ನ ಪರೀಕ್ಷೆಗಾಗಿ ಹಿಂತಿರುಗಿದೆಯಲ್ಲದೆ ನನ್ನ ಶ್ರೇಯಸ್ಸಿಗಾಗಿ ಅಲ್ಲ! ತೊಟ್ಟ ಬಾಣವನ್ನು ತೊಡಲಾರೆನೆಂಬ ತಾಯಿಗೆ ಕೊಟ್ಟ ವಾಗ್ದಾನವನ್ನು ಮುರಿಯಲಾರೆ. ಪ್ರಾಣಹೋದರೂ ಅಪಕೀರ್ತಿಗೆ ಗುರಿಯಾಗಲಾರೆ.

ಶಲ್ಯ: ಕರ್ಣ! ಇನ್ನು ಸಾವಕಾಶಮಾಡಿದರೆ ಹೇಗೆ? ಸ್ವಾಮಿ ಕಾರ್ಯಕ್ಕಾಗಿ ಯಾವ ಮಾತನ್ನಾದರೂ ಮೀರಬಹುದು! ಸಂದೇಹ ಪಡದೆ ಪುನಃ ಸರ್ಪಾಸ್ತ್ರವನ್ನು ಪ್ರಯೋಗಿಸು.

ಕರ್ಣ: ಶಲ್ಯ! ಕ್ಷಮಿಸು. ತೊಟ್ಟ ಬಾಣವನ್ನು ತೊಡಲಾರೆನೆಂಬ ಪ್ರತಿಜ್ಞೆಗೆ ಭಂಗತರಲಾರೆ.

ಶಲ್ಯ: (ಕೋಪದಿಂದ) ಹಾಗಾದರೆ ನಿನ್ನಿಂದ ಶತ್ರುವನ್ನು ಗೆಲ್ಲಲು ಸಾಧ್ಯವಿಲ್ಲ. ನಿನ್ನನ್ನೇ ನಂಬಿದ ದುರ್ಯೋಧನನಿಗೆ ಮೋಸ ಮಾಡಿದೆ. ನಿನ್ನಂತಹ ಸ್ವಾಮಿದ್ರೋಹಿಗೆ ನಾನು ಸಾರಥಿಯಾಗಲಾರೆ. ನಿನ್ನಂತೆಯೇ ನಾನೂ ನನ್ನ ಪ್ರತಿಜ್ಞೆಯನ್ನು ಮೀರಲಾರೆ. (ಎಂದು ಚಾಟಿಯನ್ನು ಬಿಸಾಡಿ ವೇಗವಾಗಿ ಹೊರಟುಹೋಗುವನು.)

ಕರ್ಣ: ಏನು! ನಾನು ಸ್ವಾಮಿದ್ರೋಹಿಯೇ! ಅದು ಹೇಗಾದೀತು? ನನ್ನ ಪ್ರಾಣವಿರುವ ತನಕ ಪ್ರತಿಜ್ಞೆಗೆ ಭಂಗಬಾರದಂತೆ ಸ್ವಾಮಿಯ ಇಷ್ಟಾರ್ಥವನ್ನು ಪೂರೈಸುವುದಕ್ಕಾಗಿ ರಥವನ್ನು ನಾನೇ ನಡೆಯಿಸಿ ಶತ್ರುವಿನೊಡನೆ ಹೋರಾಡುವೆನು. ಅರ್ಜುನಾ! ಬಾ! ನನ್ನ ಬಾಹುಬಲವನ್ನೂ ಕೈಚಳಕವನ್ನೂ ನೋಡು. (ಎಂದು ಇಬ್ಬರೂ ಯುದ್ಧ ಮಾಡುವರು. ಕರ್ಣನ ರಥವು ಹೂತುಹೋಗುವುದು.)

ಕರ್ಣ: ಅರ್ಜುನ! ಸ್ವಲ್ಪ ತಡೆ. ಹೂತುಹೋಗಿರುವ ರಥದ ಚಕ್ರವನ್ನು ಮೇಲಕ್ಕೆತ್ತುವೆನು. ಆ ಮೇಲೆ ಯುದ್ಧ ಮಾಡೋಣ. (ಎಂದು ರಥದಿಂದ ಇಳಿದು ಚಕ್ರವನ್ನು ಮೇಲಕ್ಕೆತ್ತುತ್ತಿರುವನು.)

ಕೃಷ್ಣ: ಅರ್ಜುನಾ! ಈಗಲೇ ಯಾವುದಾದರೊಂದು ದಿವ್ಯಾಸ್ತ್ರವನ್ನು ಪ್ರಯೋಗಿಸು. ಇಲ್ಲದಿದ್ದರೆ ಇವನನ್ನು ಗೆಲ್ಲುವುದು ಅಸಾಧ್ಯವಾದೀತು.

ಅರ್ಜುನ: ಕೃಷ್ಣ! ಅಸಹಾಯನಾದ ಶತ್ರುವಿಗೆ ಬಾಣಪ್ರಯೋಗ ಮಾಡಬಾರದು. ತಿಳಿಯದವನಾದ ನೀನು ಹಾಗೆ ಹೇಳಬಹುದೆ?

ಕೃಷ್ಣ: ಶತ್ರುವನ್ನು ಆಪತ್ಕಾಲದಲ್ಲೇ ಗೆಲ್ಲಬೇಕು. ಅದೇ ರಾಜನೀತಿ.

ಅರ್ಜುನ: ಚಕ್ರವು ಹೂತು ಹೋಗಿದೆ. ಕೈಯಲ್ಲಿ ಧನುಸ್ಸಿಲ್ಲ. ಇಂಥವನ ಮೇಲೆ ಹೇಗೆ ಬಾಣಬಿಡಲಿ? ಅದಲ್ಲದೆ ಈಗ ನನಗೆ ಇವನು ಸಹೋದರನಂತೆಯೇ ಕಾಣುತ್ತಾನೆ. ಆದ್ದರಿಂದ ಬಾಣವನ್ನು ಬಿಡಲಾರೆ.

ಕೃಷ್ಣ: ಏನು! ಇವನು ನಿನ್ನ ಸಹೋದರನೆ? ನಿನ್ನ ಮಗನಾದ ಅಭಿಮನ್ಯುವನ್ನು ಕೊಂದವನು ನಿನ್ನ ಅಣ್ಣನೇ? ಸುಮ್ಮನೆ ಕಾಲ ಕಳೆಯಬೇಡ. ಕೂಡಲೇ ಬಾಣವನ್ನು ಪ್ರಯೋಗಿಸು. (ಅರ್ಜುನನು ಬಾಣ ಬಿಡುವನು. ಅದು ಕರ್ಣನ ವಕ್ಷಸ್ಥಲಕ್ಕೆ ತಗಲುವುದು. ಕರ್ಣನು "ಹಾ!" ಎಂದು ಅಲ್ಲೇ ಒರಗುವನು.)

ಕರ್ಣ: ಹಾ! ದುರ್ಯೋಧನ! ನಿನ್ನ ಇಷ್ಟಾರ್ಥವನ್ನು ನೆರವೇರಿಸುವ ಭಾಗ್ಯ ನನ್ನಲ್ಲಿ ಇಲ್ಲವಾಯಿತು. ಅರ್ಜುನನ ಈ ಅಸ್ತ್ರವನ್ನು ಖಂಡಿಸಬಹುದಿತ್ತು. ಆದರೆ ಗುರುಗಳ ಶಾಪವು ಈ ಕಾಲದಲ್ಲಿ ತನ್ನ ಪ್ರಭಾವವನ್ನು ತೋರಿಸಿ ಅಸ್ತ್ರಪ್ರಯೋಗದ ಮಂತ್ರವನ್ನು ಮರೆಯಿಸಿತು. ಆದ್ದರಿಂದ ಅರ್ಜುನನ ಬಾಣಕ್ಕೆ ನನ್ನ ಎದೆಯನ್ನೊಡ್ಡಬೇಕಾಯಿತು. ಮಿತ್ರ! ಸುಯೋಧನ! ನೀನು ನನ್ನಲ್ಲಿ ಬಹಳ ವಿಶ್ವಾಸವನ್ನಿಟ್ಟಿದ್ದೆ. ಆದರೆ ಅದಕ್ಕೆ ಪ್ರತಿಯಾಗಿ ಕೃತಜ್ಞತೆಯನ್ನು ತೋರಿಸಲು ನನ್ನಿಂದ ಸಾಧ್ಯವಾಗದೆ ಹೋಯಿತು. ಅಮ್ಮಾ! ನಿನಗೆ ಕೊಟ್ಟ ಮಾತಿನಂತೆಯೇ ನಡೆದುಕೊಂಡಿರುತ್ತೇನೆ. ನೀನೂ ನಿನ್ನ ಮಕ್ಕಳೂ ಸುಖವಾಗಿ ಬಾಳಿರಿ. ಹಾ! ಕೌರವೇಶ್ವರಾ! ನನಗೆ ಹೋಗಲು ಅಪ್ಪಣೆಯನ್ನು ಕೊಡು. ಹಾ! ಭಗವಾನ್! ಸೂರ್ಯನಾರಾಯಣ! (ಎಂದು ನೆಲಕ್ಕೊರಗುವನು.)

(ತೆರೆ ಬೀಳುವುದು.)

ಸಂಪೂರ್ಣ



ಅತ್ಯುತ್ತಮ, ಮನೋರಂಜಕ ಹಾಗು ಬೋಧಪ್ರದ ಪುಸ್ತಕಗಳು ಮಾತ್ರ 'ಒಂದಾಣೆ ಮಾಲೆ'ಯಲ್ಲಿ ಪ್ರಕಟವಾಗುತ್ತಿವೆ.

●

ಯಾವ ವಯಸ್ಸಿನವರೂ ಯಾವ ತರದ ಆಕ್ಷೇಪವೂ ಇಲ್ಲದೆ ಓದುವಂಥ ಸಾಹಿತ್ಯ ಮಾತ್ರ 'ಒಂದಾಣೆ ಮಾಲೆ'ಯಿಂದ ದೊರೆಯುತ್ತಿದೆ. ಆಶ್ಲೀಲ ಎಂಬ ಅಂಶವೇ ಈ ಮಾಲೆಯ ಪ್ರಕಟಣೆಗಳಲ್ಲಿರುವುದಿಲ್ಲ.

●

ಒಂದಾಣೆಗೆ, ಪ್ರತಿಯೊಂದು ಶನಿವಾರ ಒಂದೊಂದು ಹೊಸ ಪುಸ್ತಕವನ್ನು—ವರುಷಕ್ಕೆ ಐವತ್ತೆರಡು ಪುಸ್ತಕಗಳನ್ನು—ಕೊಡುವ ಈ ಯೋಜನೆಯು ಕರ್ನಾಟಕದಲ್ಲಿ ಮಾತ್ರವಲ್ಲ, ಭಾರತದಲ್ಲೇ ಹೊಸದು.

●

ಪ್ರತಿಯೋರ್ವ ವಿದ್ಯಾರ್ಥಿಯೂ ಅವಶ್ಯ ಓದುವಂತೆ, ಪ್ರತಿಯೋರ್ವ ಗೃಹಸ್ಥನೂ—ಪ್ರತಿಯೋರ್ವ ಗೃಹಿಣಿಯೂ ಓದುವಂತೆ—'ಒಂದಾಣೆ ಮಾಲೆ'ಯು ಶುದ್ಧತೆಯ ದೃಷ್ಟಿಯಿಂದಲೂ, ಉಪಯುಕ್ತತೆಯ ದೃಷ್ಟಿಯಿಂದಲೂ, ಸೌಲಭ್ಯದ ದೃಷ್ಟಿಯಿಂದಲೂ ಸರ್ವಾನುಕೂಲವೆ ಇದೆ.

●

**ವಿ. ಸೂ:**—'ಒಂದಾಣೆ ಮಾಲೆ'ಯ ಪುಸ್ತಕಗಳನ್ನು ಕೊಂಡುಕೊಳ್ಳುತ್ತಲೇ, ಸರಿಗೆ ತೆಗೆದುಹಾಕಿ ನೂಲಿನಿಂದ ಹೊಲಿದು ಇಟ್ಟುಕೊಳ್ಳಿ.

[ಕವರಿನ 2ನೇ ಪುಟದಿಂದ ಮುಂದುವರಿದುದು]

ಕಥೆಗಳು; ೯೧ ಕೆಲವು ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪಥಿ-ಚಿಕಿತ್ಸಾಸಾರ. ೯೪ ಯಕ್ಷಗಾನ ನಾಟಕದ ಪರಂಪರೆ; ೯೫ ಪುನರುಜ್ಜೀವನ (ಏಕಾಂಕ ನಾಟಕ); ೯೬ ಪ್ರಥಮ ಚಿಕಿತ್ಸೆಯ ಕೈಪಿಡಿ; ೯೭ ಹಸ್ತರೇಖಾ ವಿಜ್ಞಾನ; ೯೮ ಸ್ವಾತಂತ್ರ್ಯ; ೯೯ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ; ೧೦೦ ಭಕ್ತ ಕುಚೇಲ; ೧೦೧ ಉತ್ತರನ ಪೌರುಷ; ೧೦೨ ಕುಮಾರ; ೧೦೩ ಕೇರಳ ಜ್ಯೋತಿಷ. ೧೦೪ ಒಗಟುಗಳ ಗೊಂಚಲು. ೧೦೫ ಊರ-ಔಷಧಿಗಳು; ೧೦೬ ಮದ್ವೆ ಅವಾಂತರ; ೧೦೭ ಜಗತ್ತಿನ ವಿಜ್ಞಾನಿಗಳು; ೧೦೮ ನಮ್ಮ ದೇಶ; ೧೦೯ ಗ್ರಾಮ ಸ್ವಾತಂತ್ರ್ಯ. ೧೧೦. ನಮ್ಮ ಕನ್ನಡನಾಡು. ೧೧೧. ಭಕ್ತ ಧ್ರುವ (ಏಕಾಂಕ ನಾಟಕ); ೧೧೨. ಕರ್ಣಾಟಕ ಕವಿಚರಿತ್ರೆ; ೧೧೩ ಜೇಡನ ಮಗಳು; ೧೧೪ ವಿವೇಕಾನಂದವಾಣಿ; ೧೧೫ ನಮ್ಮ ಆಹಾರ; ೧೧೬ ಗಾದೆಗಳು ಮತ್ತು ಜ್ಞಾನೋಕ್ತಿಗಳು; ೧೧೭ ಪುರಂದರದಾಸರು (ಏಕಾಂಕ ನಾಟಕ); ೧೧೮ ಮನುಷ್ಯ ಯಜ್ಞ. ೧೧೯ ಹೆಮ್ಮಕ್ಕಳ ಹಾಡುಗಳು; ೧೨೦ ನಮ್ಮ ಹಬ್ಬಗಳು; ೧೨೧ ವೀರಾಗ್ರಣಿ—ಕರ್ಣ.

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

Edited, Printed & Published by K. V. Shenoy
at the Prabhat Printers, Ltd., Mangalore.